## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 23(107) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಐವನ್ ಡಿ'ಸೋಜಾ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 02.03.2020 |
| ಉತ್ತರಿಸುವ ಸಚಿವರು | : | ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ನೀಟ್ ಮೂಲಕ ಸೀಟ್ ಹಂಚಿಕೆಯಲ್ಲಿ ಉಂಟಾದ ಅಕ್ರಮಗಳನ್ನು ತಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು: | The Karnataka Professional Educational Institutions (Regulation of Admission and Determination of Fee) Act, 2006ರಲ್ಲಿ ಕಲ್ಪಿಸಿರುವ ಅವಕಾಶಗಳನ್ವಯ ಸರ್ಕಾರ ಮತ್ತು ಖಾಸಗಿ ವೈದ್ಯಕೀಯ ಸಂಸ್ಥೆಗಳ ಆಡಳಿತ ಮಂಡಳಿಗಳೊಂದಿಗೆ ಮಾಡಿಕೊಂಡ ಪರಸ್ಪರ ಒಡಂಬಡಿಕೆಯನ್ವಯ ಸೀಟುಗಳನ್ನು ಹಂಚಿಕೆ ಮಾಡಲಾಗುತ್ತಿದೆ. ಈ ಕುರಿತುಂತೆ ಉಪ ಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಿದ್ದು, ಸಮಿತಿಯು ಶಿಫಾರಸ್ಸಿನೊಳಗೊಂಡ ಸಲ್ಲಿಸಿರುವ ವರದಿಯನ್ನು ಪರಿಶೀಲಿಸಲಾಗುತ್ತಿದ್ದು, ಅದರಂತೆ, ಕ್ರಮವಹಿಸಲಾಗುವುದು. |
| ಆ | ರಾಜ್ಯದಲ್ಲಿ ಎಷ್ಟು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೇ; ಎಷ್ಟು ಪ್ರಕರಣಗಳಲ್ಲಿ ವಿದ್ಯಾರ್ಥಿಗಳು ನ್ಯಾಯಾಲಯದ ಮುಖಾಂತರ ಸೀಟುಗಳನ್ನು ಪಡೆದುಕೊಂಡಿದ್ದಾರೆ; (ವಿವರ ನೀಡುವುದು) | ನ್ಯಾಯಾಲಯದ ಮುಖಾಂತರ ಸೀಟುಗಳನ್ನು ಪಡೆದುಕೊಂಡಿರುವ ಯಾವುದೇ ಪ್ರಕರಣ ಇರುವುದಿಲ್ಲ. |
| ಇ | ನೀಟ್ ಮೂಲಕ ಸೀಟು ನೀಡುವ ಕಾಲೇಜುಗಳು ಮೆರಿಟ್ ವಿದ್ಯಾರ್ಥಿಗಳನ್ನು ಕ್ರಯಕ್ಕೆ ಪಡೆದು ಸೀಟ್ ಬ್ಲಾಕ್ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಲ್ಲಿ ಶಾಮೀಲಾದ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು; | ಸೀಟ್ ಬ್ಲಾಕಿಂಗ್ ವಿಚಾರವಾಗಿ ಪತ್ರಿಕೆಗಳಲ್ಲಿ ಪ್ರಸ್ತಾಪವಾದ ಅಂಶವನ್ನು ಗಮನಿಸಿ ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ಆಗಬಹುದಾದ ಸೀಟ್ ಬ್ಲಾಕಿಂಗ್‌ನ್ನು ತಡೆಯುವ ಸಂಬಂಧ ಪ್ರಸ್ತುತ ಜಾರಿಯಲ್ಲಿರುವ ಕಾಯ್ದೆ ಮತ್ತು ನಿಯಮಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ವರದಿ / ಸಲಹೆ ನೀಡುವ ಸಂಬಂಧ ಸಮಿತಿ ರಚಿಸಲಾಗಿತ್ತು. ಸದರಿ ಸಮಿತಿಯು ವರದಿಯನ್ನು ಸಲ್ಲಿಸಿದ್ದು, ಕಾಯ್ದೆ ಮತ್ತು ನಿಯಮಗಳಲ್ಲಿ ತಿದ್ದುಪಡಿ ತರುವ ಬಗ್ಗೆ ಪರಿಶೀಲಿಸಲಾಗುತ್ತಿದೆ. |
| ಈ | ಮೆಡಿಕಲ್ ಕಾಲೇಜುಗಳಲ್ಲಿ ಸೀಟುಗಳನ್ನು ಹಂಚಿಕೆ ಮಾಡುವಾಗ ಸರ್ಕಾರಿ ನಿಯಮಗಳನ್ನು ಉಲ್ಲಂಘಿಸಿದ ಪ್ರಕರಣಗಳೆಷ್ಟು; ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | |

| | | |
|---|---|---|
| | | ಈ ಮೂಲಕ ವೈದ್ಯಕೀಯ ಸ್ನಾತಕ ಮತ್ತು ಸ್ನಾತಕೋತ್ತರ ಕೋರ್ಸುಗಳ ಸೀಟು ಹಂಚಿಕೆಯಲ್ಲಿ ಮತ್ತಷ್ಟು ಪಾರದರ್ಶಕತೆ ಮತ್ತು ಕಠಿಣ ನಿಯಮಗಳನ್ನು ಜಾರಿಗೆ ತಂದು ಅರ್ಹ ಪ್ರತಿಭಾನ್ವಿತ ವಿದ್ಯಾರ್ಥಿಗಳ ಹಿತಾಸಕ್ತಿಯನ್ನು ಕಾಪಾಡಲು ಕ್ರಮಕೈಗೊಳ್ಳಲಾಗುತ್ತದೆ. |
| ಉ | ನೀಟ್ ನಿಯಮ ಉಲ್ಲಂಘಿಸಿದ ಎಷ್ಟು ಮೆಡಿಕಲ್ ಕಾಲೇಜುಗಳ ವಿರುದ್ಧ ಸರ್ಕಾರ ಕ್ರಮ ಕೈಗೊಂಡಿದೆ; ಸೀಟುಗಳನ್ನು ಜಾಲತಾಣದಲ್ಲಿ ಪಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ನೀಟ್ ಅರ್ಹತೆ ಹೊಂದಿದರವರಿಗೆ ಮಾತ್ರ ಪ್ರವೇಶ ನೀಡುವ ನಿಯಮವಿದೆ. ನೀಟ್ ಅರ್ಹತೆ ಹೊಂದಿದ ವಿದ್ಯಾರ್ಥಿಗಳಿಗೆ ಮಾತ್ರ ರಾಜ್ಯದಲ್ಲಿ ಕೆ.ಇ.ಎ ಮುಖೇನ ಸೀಟ್ ಹಂಚಿಕೆ ಮಾಡಲಾಗುತ್ತಿದೆ. ಇದನ್ನು ಕಾಲೇಜುಗಳೊಂದಿಗೆ ಒಡಂಬಡಿಕೆ ಒಪ್ಪಂದದಲ್ಲಿ ಸಹ ನಮೂದಿಸಿದೆ. ಸೀಟ್ ಅರ್ಹತೆ ಹೊಂದಿಲ್ಲದೆ ಇರುವ ಯಾವುದೇ ವಿದ್ಯಾರ್ಥಿಗೂ ಪ್ರವೇಶಾತಿ ನೀಡಿರುವುದಿಲ್ಲ. ವೈದ್ಯಕೀಯ ಪೂರ್ಣ ಕೌನ್ಸಿಲಿಂಗ್ ಪ್ರಕ್ರಿಯೆಯನ್ನು ಕೆ.ಇ.ಎ ಗೆ ವಹಿಸಿದ್ದು, ಜಾಲತಾಣದ ಮುಖೇನ ನೀಟ್ ಅರ್ಹತೆ ಹೊಂದಿದ ವಿದ್ಯಾರ್ಥಿಗಳನ್ನು ಮಾತ್ರ ನೊಂದಾಯಿಸಿಕೊಳ್ಳಲಾಗುತ್ತಿದೆ ಹಾಗೂ ಈ ರೀತಿ ನಿಯಮಾನುಸಾರ ನೊಂದಾಯಿಸಿಕೊಂಡ ಅರ್ಹ ವಿದ್ಯಾರ್ಥಿಗಳಿಗೆ ಮಾತ್ರ ಜಾಲತಾಣದ ಮುಖೇನ 02 ಸುತ್ತಿನ ಕೌನ್ಸಿಲಿಂಗ್‌ನ್ನು ಕೆ.ಇ.ಎ ವತಿಯಿಂದ ನಡೆಸಲಾಗುತ್ತಿದೆ. ಮುಂದುವರೆದು, ಸುಪ್ರೀಂ ಕೋರ್ಟ್ ನಿರ್ಣಯದಂತೆ ಮಾಪ್‌ಅಪ್ ರೌಂಡ್ ನಡೆಸಲಾಗುತ್ತಿದೆ. |

**ಸಂಖ್ಯೆ:** ಎಂಇಡಿ 21 ಆರ್‌ಜಿಯು 2020

(ಡಾ|| ಕೆ ಸುಧಾಕರ್)
ವೈದ್ಯಕೀಯ ಶಿಕ್ಷಣ ಇಲಾಖೆ